ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 19 ನೇ ಮಾರ್ಚ್, 2020

ವೀಸಾ ಅವಧಿ ಮುಗಿದ ಬಳಿಕ ರಾಜ್ಯದಲ್ಲಿರುವ ವಿದ್ಯಾರ್ಥಿಗಳ ಕುರಿತು

ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು):-

1327 (1461) ಮಾನ್ಯ ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ವೀಸಾ ಅವಧಿ ಮುಗಿದ ಬಳಿಕ ರಾಜ್ಯದಲ್ಲಿರುವ ವಿದ್ಯಾರ್ಥಿಗಳ ಮೀಸಾ ಹೊಂದಿರುವ ಕಳೆದ 5 ವರ್ಷಗಳಲ್ಲಿ ನಡೆಸಿದ ಅಪರಾಧ ಪ್ರಕರಣಗಳ ವಿವರ ನೀಡುವುದು; ಜಿಲ್ಲಾವಾರು ಮತ್ತು ಯಾವ ಶಿಕ್ಷಣ ಸಂಸ್ಥೆಯಲ್ಲಿ ಪ್ರವೇಶಾತಿ ಪಡೆದಿರುತ್ತಾರೋ ಆ ಶಿಕ್ಷಣ ಸಂಸ್ಥೆಯ ಹೆಸರಿನೊಂದಿಗೆ ಮಾಹಿತಿ ನೀಡುವುದು ;

(ಆ) ವಿದ್ಯಾರ್ಥಿ ವೀಸಾ ಹೊಂದಿರುವ ವಿದೇಶಿ ವಿದ್ಯಾರ್ಥಿಗಳು ರಾಜ್ಯದಲ್ಲಿ ನಡೆಸಿದ ಅಪರಾಧ ಪ್ರಕರಣಗಳ ಕುರಿತು ಎಷ್ಟು ಶಿಕ್ಷಣ ಸಂಸ್ಥೆಗಳನ್ನು ಹೊಣೆಗಾರರನ್ನಾಗಿ ಮಾಡಲಾಗಿದೆ; ವಿದೇಶಿ ವಿದ್ಯಾರ್ಥಿಗಳಿಗೆ ಪ್ರವೇಶ ನೀಡಿದ ಶಿಕ್ಷಣ ಸಂಸ್ಥೆಗಳ ಮೇಲೆ ಕ್ರಿಮಿನಲ್ ಪ್ರಕರಣ ದಾಖಲಿಸದಿರಲು ಕಾರಣವೇನು;

(ಇ) ವಿದೇಶಿ ವಿದ್ಯಾರ್ಥಿಗಳಿಂದ ದೊಡ್ಡ ಮೊತ್ತದ ಫೀಸನ್ನು ಪಡೆಯುವ ಖಾಸಗಿ ಶಿಕ್ಷಣ ಸಂಸ್ಥೆಗಳ ಅಂತಹ ವಿದ್ಯಾರ್ಥಿಗಳ ವೀಸಾ ಅವಧಿ ಮುಗಿದ ಬಳಿಕ ಅವರನ್ನು ಅವರ ದೇಶಗಳಿಗೆ ಕಳುಹಿಸುವ ಯಾವ ಪ್ರಯತ್ನವನ್ನು ಮಾಡದೆ ಸಮಾಜ ವಿರೋಧ ಕೃತ್ಯಗಳಲ್ಲಿ ತೊಡಗಲು ಪ್ರೋತ್ಸಾಹಿಸುತ್ತಿರುವ ಶಿಕ್ಷಣ ಸಂಸ್ಥೆಗಳ ಮಾನ್ಯತೆ ರದ್ದು ಮಾಡಲು ಇದುವರೆಗೆ ಪೊಲೀಸ್ ಇಲಾಖೆ ಎಷ್ಟು ಶಿಕ್ಷಣ ಸಂಸ್ಥೆಗಳ ಕುರಿತು ಶಿಕ್ಷಣ ಇಲಾಖೆಗೆ ಶಿಫಾರಸ್ಸು ಮಾಡಿದೆ; ಇಲ್ಲವಾದಲ್ಲಿ ಯಾವ ಕಾರಣಕ್ಕೆ ಮಾಡಿಲ್ಲ? (ವಿವರ ನೀಡುವುದು)